

# ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರ ಹೆಸರು : ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 867(1114)

ಉತ್ತರಿಸುವ ಸಚಿವರು : ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

ಉತ್ತರಿಸಬೇಕಾದ ದಿನಾಂಕ : 13.03.2020

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಇಡೀ ದೇಶದಲ್ಲಿ ಕರ್ನಾಟಕವು ಹತ್ತಿ ಬೆಳೆಯುವಲ್ಲಿ ಅಗ್ರ ಸ್ಥಾನದಲ್ಲಿದ್ದು, ಅದೇ ರೀತಿ ರಾಜ್ಯದಲ್ಲಿ ಹಲವಾರು ನೇಯ್ಗೆ ಗಿರಣಿಗಳು ಹಾಗೂ ಹತ್ತಿ ಗಿರಣಿಗಳಿದ್ದು, ಹತ್ತಿ ಬೆಳೆಗಾರರನ್ನು ಉತ್ತೇಜಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ರಾಜ್ಯದಲ್ಲಿ ಜವಳಿ ಕ್ಷೇತ್ರದಲ್ಲಿ ಹೊಸದಾಗಿ ಸ್ಥಾಪಿಸಲ್ಪಡುವ ಜಿನ್ನಿಂಗ್, ಸ್ಪಿನಿಂಗ್, ವೀವಿಂಗ್ ಘಟಕಗಳಿಗೆ ಪ್ರೋತ್ಸಾಹಧನ ಹಾಗೂ ಉತ್ತೇಜನಗಳನ್ನು ನೀಡಲು ಸರ್ಕಾರವು ದಿನಾಂಕ: 04.11.2019ರಲ್ಲಿ ನೂತನ ಜವಳಿ ಮತ್ತು ಸಿದ್ಧ ಉಡುಪು ನೀತಿ 2019-24ನ್ನು ಘೋಷಿಸಲಾಗಿದೆ. ಸದರಿ ನೀತಿಯ ಅವಧಿಯಲ್ಲಿ ಜವಳಿ ಘಟಕಗಳಿಗೆ ವಿವಿಧ ಕಾಂಪೋನೆಂಟ್‌ಗಳ ಅಡಿ ಈ ಕೆಳಕಂಡ ಪ್ರೋತ್ಸಾಹಧನಗಳನ್ನು ನೀಡುವ ಅವಕಾಶವಿರುತ್ತದೆ:-<br>• ಬಂಡವಾಳ ಸಹಾಯಧನ<br>• ಬಡ್ಡಿ ಸಹಾಯಧನ<br>• ವಿದ್ಯುಚ್ಛಕ್ತಿ ಮರುಪಾವತಿ<br>• ವೇತನ ಸಹಾಯಧನ<br>• ಇ.ಎಸ್.ಐ& ಇ.ಪಿ.ಎಫ್ ಮರುಪಾವತಿ ಸಹಾಯಧನ (ಎಂ.ಎಸ್.ಎಂ.ಇ)<br>• ಮುದ್ರಾಂಕ ಶುಲ್ಕ ವಿನಾಯಿತಿ & ನೋಂದಣಿ ಶುಲ್ಕ ರಿಯಾಯಿತಿ.<br>ಈ ಘಟಕಗಳ ಸ್ಥಾಪನೆಯಿಂದಾಗಿ, ರಾಜ್ಯದ ಹತ್ತಿ ಬೆಳೆಗಾರರಿಗೆ ಅವರು ಬೆಳೆದ ಹತ್ತಿ ಬೆಳೆಗೆ ಸ್ಥಳೀಯವಾಗಿ ಹೆಚ್ಚಿನ ಮಾರುಕಟ್ಟೆ ಒದಗಿಸಿ ಉತ್ತಮ ದರ ಸಿಗುವಂತೆ ಹತ್ತಿ ಬೆಳೆಗಾರರನ್ನು ಉತ್ತೇಜಿಸಲಾಗುತ್ತಿದೆ. |
| ಆ) | ರಾಜ್ಯ ಸರ್ಕಾರದ ಸ್ವಾಮ್ಯದಲ್ಲಿರುವ ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮವನ್ನು (KHDC) ಯಾವಾಗ ಆರಂಭಿಸಲಾಯಿತು ಮತ್ತು ಅದರ ಕಾರ್ಯಸ್ಥಾನವೆಲ್ಲಿದೆ; | ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮವನ್ನು ಅಕ್ಟೋಬರ್ 1975ರಲ್ಲಿ ಪ್ರಾರಂಭಿಸಲಾಗಿದ್ದು, ನಿಗಮದ ಕೇಂದ್ರ ಕಾರ್ಯಸ್ಥಾನ ಹುಬ್ಬಳ್ಳಿಯಲ್ಲಿರುತ್ತದೆ. |
| ಇ) | ಕಳೆದ ಮೂರು ವರ್ಷಗಳ ಅವಧಿಯಲ್ಲಿ ಈ ನಿಗಮದಿಂದ ಹಾಗೂ ನಿಗಮದ ಸಹಾಯದಿಂದ ಉತ್ಪಾದಿಸಲಾದ ಒಟ್ಟು ಬಟ್ಟೆಯ ಪ್ರಮಾಣ ಮತ್ತು ಮೊತ್ತವೆಷ್ಟು; | ಕಳೆದ ಮೂರು ವರ್ಷಗಳಲ್ಲಿ ನಿಗಮದಲ್ಲಿ ಉತ್ಪಾದಿಸಲಾದ ಹತ್ತಿ ಮತ್ತು ರೇಷ್ಮೆ ಬಟ್ಟೆಗಳ ಪ್ರಮಾಣ ಮತ್ತು ಮೊತ್ತದ ವಿವರಗಳನ್ನು ಅನುಬಂಧ-1ರಲ್ಲಿ ಒದಗಿಸಿದೆ. |

| | | |
|---|---|---|
| ಈ) | ಈ ಉತ್ಪಾದಿತ ಬಟ್ಟೆಯನ್ನು ಸರ್ಕಾರದ ಯೋಜನೆಯಲ್ಲಿರುವ ಸರ್ಕಾರಿ ಸ್ವಾಮ್ಯದ ಸಂಸ್ಥೆಗಳಿಗೆ ಮಾರಾಟ ಮಾಡಲಾಗುತ್ತಿದೆಯೇ; ಇದ್ದಲ್ಲಿ, ಕಳೆದ ಮೂರು ವರ್ಷಗಳ ವಹಿವಾಟಿನ ವಿವರ ನೀಡುವುದು; | ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮದಡಿ ಉತ್ಪಾದಿಸಲಾದ ಬಟ್ಟೆಗಳನ್ನು ಶಿಕ್ಷಣ ಇಲಾಖೆಯ ವಿದ್ಯಾವಿಕಾಸ ಯೋಜನೆಯಡಿ ಶಾಲಾ ಮಕ್ಕಳಿಗೆ ಸಮವಸ್ತ್ರವನ್ನು ಸರಬರಾಜು ಮಾಡಲಾಗುತ್ತಿದ್ದು. ಕಳೆದ ಮೂರು ವರ್ಷಗಳ ವಹಿವಾಟಿನ ವಿವರಗಳನ್ನು ಅನುಬಂಧ-2ರಲ್ಲಿ ಒದಗಿಸಿದೆ. |
| ಉ) | ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮದ ಕೇಂದ್ರ ಸ್ಥಾನವನ್ನು ಹುಬ್ಬಳ್ಳಿಗೆ ಸ್ಥಳಾಂತರಿಸಲಾಗಿದೆಯೇ; ಇದ್ದಲ್ಲಿ ಯಾವ ವರ್ಷದಲ್ಲಿ ಸ್ಥಳಾಂತರಿಸಲಾಯಿತು; | ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮದ ಕೇಂದ್ರ ಸ್ಥಾನವನ್ನು ಬೆಂಗಳೂರಿನಿಂದ ಹುಬ್ಬಳ್ಳಿಗೆ 1997ರಲ್ಲಿ ಸ್ಥಳಾಂತರಿಸಲಾಗಿರುತ್ತದೆ. |
| ಊ) | ಸದರಿ ಸಂಸ್ಥೆಯನ್ನು ಸ್ಥಳಾಂತರಿಸಿದ ನಂತರ ಇದರ ಕಾರ್ಯಸ್ಥಾನವು ಹುಬ್ಬಳ್ಳಿಯಲ್ಲಿದೆಯೇ; ಅಥವಾ ನೆಪಕ್ಕೆ ಹುಬ್ಬಳ್ಳಿಯಲ್ಲಿದ್ದು, ಬೆಂಗಳೂರಿನಿಂದ ಕಾರ್ಯನಿರ್ವಹಿಸುತ್ತಿದೆ ಎಂಬುದಾಗಿ ಕೇಳಿ ಬರುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಇದಕ್ಕೆ ಕಾರಣಗಳೇನು? (ವಿವರ ನಿಡುವುದು) | ನಿಗಮದ ಕೇಂದ್ರ ಕಚೇರಿ ಹುಬ್ಬಳ್ಳಿಯಲ್ಲಿದ್ದರೂ ಸಹ ಬಹುತೇಕ ನಿಗಮದ ವಿಭಾಗಗಳು ಬೆಂಗಳೂರಿನಲ್ಲಿಯೇ ಕಾರ್ಯ ನಿರ್ವಹಿಸುತ್ತಿದ್ದವು, ಆದರೆ ದಿನಾಂಕ: 16.02.2019 ಮತ್ತು 05.03.2019ರ ನಿಗಮದ ಆದೇಶದನ್ವಯ. ಈ ಕೆಳಗೆ ನಮೂದಿಸಿರುವ ಕೆಲವು ವಿಭಾಗಗಳನ್ನು ಹೊರತುಪಡಿಸಿ, ಎಲ್ಲಾ ವಿಭಾಗಗಳನ್ನು ಬೆಂಗಳೂರಿನಿಂದ ಹುಬ್ಬಳ್ಳಿಗೆ ಸ್ಥಳಾಂತರಿಸಲಾಗಿದ್ದು, ಪ್ರಸ್ತುತ ಸದರಿ ಸಿಬ್ಬಂದಿಗಳು ಹುಬ್ಬಳ್ಳಿ ಕೇಂದ್ರ ಕಚೇರಿಯಿಂದಲೇ ಕಾರ್ಯನಿರ್ವಹಿಸುತ್ತಿದ್ದಾರೆ. ಇದರಿಂದ ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮವು ಪ್ರಸ್ತುತ ಪೂರ್ಣ ಪ್ರಮಾಣದಲ್ಲಿ ಹುಬ್ಬಳ್ಳಿಯಲ್ಲಿಯೇ ಕಾರ್ಯ ನಿರ್ವಹಿಸುತ್ತಿದೆ. ಉಳಿದಂತೆ ಬೆಂಗಳೂರಿನಲ್ಲಿ ಸರ್ಕಾರದ ಮಟ್ಟದಲ್ಲಿ ನಡೆಯುವ ಸಭೆಗಳಿಗೆ ಹಾಜರಾಗುವ ಸಲುವಾಗಿ ಹಾಗೂ ನಿಗಮದ ಬ್ಯಾಂಕ್ ಖಾತೆಗಳನ್ನು ಬೆಂಗಳೂರಿನಲ್ಲಿ ಹೊಂದಿರುವ ಕಾರಣ ಕೇವಲ ಹಣಕಾಸು ನಿಯಂತ್ರಕರ ಕೆಲವು ಸಿಬ್ಬಂದಿ, ಸಿದ್ದ ಸರಕು ದಾಸ್ತಾನು ಉಗ್ರಾಣ ಮತ್ತು ಸಗಟು ಮಾರಾಟ ವಿಭಾಗಗಳು ಮಾತ್ರ ಬೆಂಗಳೂರಿನಲ್ಲಿ ಕಾರ್ಯನಿರ್ವಹಿಸುತ್ತಿವೆ. |

ಸಂ: ವಾಕೈ 73 JAKE 2020

(ಶ್ರೀಮಂತ ಬಾಳಾಸಾಹೇಬ ಪಾಟೀಲ್)
ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

## ಅನುಬಂಧ– 1

ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮ ನಿಯಮಿತ, ಪ್ರಧಾನ ಕಛೇರಿ ಹುಬ್ಬಳ್ಳಿ
ಕಳೆದ ಮೂರು ವರ್ಷಗಳಲ್ಲಿ ನಿಗಮದಲ್ಲಿ ಉತ್ಪಾದಿಸಲಾದ ಹತ್ತಿ ಮತ್ತು ರೇಷ್ಮೆ ಬಟ್ಟೆಗಳ ಪ್ರಮಾಣ ಮತ್ತು ಮೊತ್ತದ ವಿವರ:

| ನಮೂನೆ | 2016–17 | | 2017–18 | | 2018–19 | |
|---|---|---|---|---|---|---|
| | ಪ್ರಮಾಣ (ಲಕ್ಷ ಮೀಟರ್ ಗಳಲ್ಲಿ) | ಮೊತ್ತ ಕೋಟಿಗಳಲ್ಲಿ | ಪ್ರಮಾಣ (ಲಕ್ಷ ಮೀಟರ್ ಗಳಲ್ಲಿ) | ಮೊತ್ತ ಕೋಟಿಗಳಲ್ಲಿ | ಪ್ರಮಾಣ (ಲಕ್ಷ ಮೀಟರ್ ಗಳಲ್ಲಿ) | ಮೊತ್ತ ಕೋಟಿಗಳಲ್ಲಿ |
| ಹತ್ತಿ/ಪಾಲಿಯಸ್ಟರ್ ಬಟ್ಟೆ | 54.06 | 33.79 | 57.75 | 37.58 | 46.85 | 30.43 |
| ರೇಷ್ಮೆ ಬಟ್ಟೆ | 1.69 | 8.82 | 1.41 | 7.79 | 1.12 | 5.45 |
| ಒಟ್ಟು | 55.75 | 42.61 | 59.16 | 45.37 | 47.97 | 35.88 |

ಜವಳಿ ಅಭಿವೃದ್ಧಿ ಆಯುಕ್ತರು ಹಾಗೂ
ನಿರ್ದೇಶಕರು ಕೈಮಗ್ಗ ಮತ್ತು ಜವಳಿ

## ಅನುಬಂಧ- 2

**ಕಳೆದ ಮೂರು ವರ್ಷಗಳಲ್ಲಿ ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮದಲ್ಲಿ ಉತ್ಪಾದಿಸಲಾದ ಬಟ್ಟೆಯನ್ನು ಸರ್ಕಾರಿ ಸ್ವಾಮ್ಯದ ಶಿಕ್ಷಣ ಇಲಾಖೆಗೆ ಸರಬರಾಜು ಮಾಡಿದ ವಿವರಗಳು:**

| ನಮೂನೆ | 2016-17 | | 2017-18 | | 2018-19 | |
|---|---|---|---|---|---|---|
| | ಪ್ರಮಾಣ (ಮೀಟರ್‌ಗಳಲ್ಲಿ) | ಮೊತ್ತ (ರೂ.ಗಳಲ್ಲಿ) | ಪ್ರಮಾಣ (ಮೀಟರ್ ಗಳಲ್ಲಿ) | ಮೊತ್ತ (ರೂ.ಗಳಲ್ಲಿ) | ಪ್ರಮಾಣ (ಮೀಟರ್‌ಗಳಲ್ಲಿ) | ಮೊತ್ತ (ರೂ.ಗಳಲ್ಲಿ) |
| ಹತ್ತಿ / ಪಾಲಿಯಸ್ಟರ್ ಬಟ್ಟೆ | 55,51,623.00 | 43,28,69,316.00 | 50,30,535.00 | 39,82,18,262.00 | 28,54,376.00 | 21,72,00,397.00 |

ಜವಳಿ ಅಭಿವೃದ್ಧಿ ಆಯುಕ್ತರು ಹಾಗೂ
ನಿರ್ದೇಶಕರು ಕೈಮಗ್ಗ ಮತ್ತು ಜವಳಿ